ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 880 |
| ಮಾನ್ಯ ಸದಸ್ಯರ ಹೆಸರು | ಶ್ರೀ ಎಂ.ಎ. ಗೋಪಾಲಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ದಿನಾಂಕ | 20.09.2021 |
| ಉತ್ತರಿಸುವ ಸಚಿವರು | ಉನ್ನತ ಶಿಕ್ಷಣ, ಐಟಿ&ಬಿಟಿ, ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಸಿ.ಇ.ಟಿ ಮತ್ತು ಕಾಮೆಡ್-ಕೆ ಪರೀಕ್ಷೆಗಳು ನಡೆಯುವ ಮೊದಲೇ ಹಾಗೂ ಈ ಪರೀಕ್ಷೆಗಳ ಫಲಿತಾಂಶ ಪ್ರಕಟಿಸುವ ಮೊದಲೇ ಕಾಲೇಜುಗಳಲ್ಲಿ ಮ್ಯಾನೇಜ್‌ಮೆಂಟ್ ಸೀಟುಗಳನ್ನು ಹಂಚಿಕೆ ಮಾಡುತ್ತಿರುವುದು (pre booking) ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ರೀತಿ (pre booking) ಮಾಡಲು ಅವಕಾಶವಿದೆಯೇ; (ಸಂಪೂರ್ಣ ವಿವರ ನೀಡುವುದು) | ಬಂದಿರುವುದಿಲ್ಲ |
| ಆ) | ಕಾಲೇಜುಗಳಿಗೆ ಹಂಚಿಕೆ ಮಾಡಿರುವ ಮ್ಯಾನೇಜ್‌ಮೆಂಟ್ ಸೀಟುಗಳನ್ನು ಸಿ.ಇ.ಟಿ ಮತ್ತು ಕಾಮೆಡ್-ಕೆ ಪರೀಕ್ಷೆಗಳ ಮೂಲಕ ತುಂಬಲು ಸರ್ಕಾರವು ರೂಪಿಸಿರುವ ಮಾರ್ಗಸೂಚಿಗಳೇನು; (ರಾಜ್ಯದಲ್ಲಿರುವ ಇಂಜಿನಿಯರಿಂಗ್ ಕಾಲೇಜುಗಳಿಗೆ ಸಿ.ಇ.ಟಿ/ ಕಾಮೆಡ್-ಕೆ/ ಮ್ಯಾನೇಜ್‌ಮೆಂಟ್ ಸೀಟುಗಳನ್ನು ಹಂಚಿಕೆ ಮಾಡಿರುವ ಸಂಪೂರ್ಣ ವಿವರ ಒದಗಿಸುವುದು) | ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ(ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗದಿ) ಅಧಿನಿಯಮ, 2006ರ ಪ್ರಕರಣ '4ಎ'ರನ್ವಯ ವೃತ್ತಿಪರ ಸೀಟು ಹಂಚಿಕೆಯಲ್ಲಿ ಪ್ರತಿ ವರ್ಷವೂ ಸರ್ಕಾರ ಹಾಗೂ ಆಡಳಿತ ಮಂಡಳಿಯವರ ಮಧ್ಯೆ ಸಮ್ಮತಾಭಿಪ್ರಾಯ ಒಪ್ಪಂದವನ್ನು ಮಾಡಲಾಗುತ್ತದೆ. ಅದರಂತೆ, ಈ ಕೆಳಕಂಡಂತೆ ಸರ್ಕಾರ, ಅನುದಾನಿತವಲ್ಲದ ಅಲ್ಪಸಂಖ್ಯಾತೇತರ ವೃತ್ತಿ ಶಿಕ್ಷಣ ಸಂಸ್ಥೆ(KUPECA) ಮತ್ತು ಅನುದಾನಿತವಲ್ಲದ ಅಲ್ಪಸಂಖ್ಯಾತ ವೃತ್ತಿ ಶಿಕ್ಷಣ ಸಂಸ್ಥೆ(KRLMPCA)ಗಳ ನಡುವೆ ಸೀಟು ಹಂಚಿಕೆಯನ್ನು ಈ ಕೆಳಕಂಡಂತೆ ನಿಗಧಿಪಡಿಸಲಾಗಿರುತ್ತದೆ. |

| ಕ್ರ.ಸಂ | ಕಾಲೇಜುಗಳು | ಸರ್ಕಾರಿ ಕೋಟಾ | ಕಾಮೆಡ್-ಕೆ/ ಅಲ್ಪಸಂಖ್ಯಾತ ಕೋಟಾ | ಆಡಳಿತ ಮಂಡಳಿ ಕೋಟಾ | ಎನ್‌ಆರ್‌ಐ ಕೋಟಾ |
|---|---|---|---|---|---|
| 01 | ಸರ್ಕಾರಿ | 100% | – | – | – |
| 02 | ಅನುದಾನಿತ | 95% | – | 5% | – |
| 03 | ಖಾಸಗಿ ಅಲ್ಪಸಂಖ್ಯಾತವಲ್ಲದ | 45% | 30% | 10% | 15% |
| 04 | ಖಾಸಗಿ ಅಲ್ಪಸಂಖ್ಯಾತ | 40% | 30% | 10% | 20% |

| | | |
|---|---|---|
| ಇ) | ಸಿ.ಇ.ಟಿ ಅಥವಾ ಕಾಮೆಡ್-ಕೆ ಪರೀಕ್ಷೆಗಳಲ್ಲಿ ತೆಗೆದ ರ್‍ಯಾಂಕ್ ಆಧಾರದ ಮೇಲೆ ಮ್ಯಾನೇಜ್‌ಮೆಂಟ್ ಸೀಟುಗಳನ್ನು ಹಂಚಿಕೆ ಮಾಡಲಾಗುವುದೇ ಅಥವಾ ಯಾವ ರೀತಿ ಹಂಚಿಕೆ ಮಾಡಲಾಗುವುದು; ನೀಟ್ ಪರೀಕ್ಷೆಯ ಮಾದರಿಯಲ್ಲಿಯೇ ಇಂಜಿನಿಯರಿಂಗ್ ಮ್ಯಾನೇಜ್‌ಮೆಂಟ್ ಸೀಟುಗಳನ್ನು ಹಂಚಿಕೆ ಮಾಡಲಾಗುವುದೇ; ಈ ಸಂಬಂಧ ಸರ್ಕಾರ ರೂಪಿಸುವ ಮಾರ್ಗಸೂಚಿಗಳೇನು? (ಸಂಪೂರ್ಣ ವಿವರ ನೀಡುವುದು) | ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗಧಿ) ಅಧಿನಿಯಮ 2006ರಲ್ಲಿ ನೀಡಿರುವ ಅವಕಾಶದಂತೆ ಆಡಳಿತ ಮಂಡಳಿ ಕೋಟಾ ಸೀಟುಗಳ ಪ್ರವೇಶಾತಿಗೆ ಸಂಬಂಧಿಸಿದಂತೆ ಸಿ.ಇ.ಟಿ/ಕಾಮೇಡ್-ಕೆ/ಇನ್ನಿತರೆ ಅರ್ಹತಾ ಪರೀಕ್ಷೆಗಳಲ್ಲಿ/ಕಾಲೇಜು ಹಂತದಲ್ಲಿಯೇ ನಡೆಸುವ ಪ್ರವೇಶ ಪರೀಕ್ಷೆ ಮೂಲಕ ಸೀಟು ಹಂಚಿಕೆ ಮಾಡಲಾಗುತ್ತದೆ. |

ಇಡಿ 197 ಟಿಇಸಿ 2021

(ಡಾ|| ಅಶ್ವಥ್ ನಾರಾಯಣ ಸಿ.ಎನ್.)
ಉನ್ನತ ಶಿಕ್ಷಣ, ಐಟಿ&ಬಿಟಿ, ವಿಜ್ಞಾನ ಮತ್ತು ತಂತ್ರಜ್ಞಾನ,
ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಹಾಗೂ ಜೀವನೋಪಾಯ
ಇಲಾಖೆ ಸಚಿವರು